ಲಿಖಿತ ಮೂಲಕ ಉತ್ತರಿಸುವ

# ಕರ್ನಾಟಕ ವಿಧಾನ ಪರಿಷತ್ತು

ನೂರ ಮೂವತ್ತೆಂಟನೆಯ ಅಧಿವೇಶನ

ಗುರುವಾರ, ದಿನಾಂಕ: 18ನೇ ಜುಲೈ, 2019

ಸರ್ಕಾರಿ ನೌಕರರ ಪದೋನ್ನತಿ ಕುರಿತು

ಶ್ರೀ ಅರುಣ ಶಹಾಪುರ (ಶಿಕ್ಷಕರ ಕ್ಷೇತ್ರ) :-

286 (536) ಮಾನ್ಯ ಮುಖ್ಯಮಂತ್ರಿಗಳು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಸರ್ಕಾರಿ ನೌಕರರ/ಸಿಬ್ಬಂದಿಗಳ ಪದೋನ್ನತಿ ಕುರಿತು ಬಿ.ಕೆ. ಪವಿತ್ರ ಪ್ರಕರಣದಲ್ಲಿ ಸುಪ್ರೀಂ ಕೋರ್ಟ್ ನೀಡಿರುವ ತೀರ್ಪಿನ ವಿವರವನ್ನು ಸಂಪೂರ್ಣ ವಿವರದೊಂದಿಗೆ ನೀಡುವುದು ; (ಪ್ರತಿ ನೀಡಿ)

(ಆ) ಪ್ರಸ್ತುತ ಎಲ್ಲಾ ಇಲಾಖೆಗಳಲ್ಲಿ ಪದೋನ್ನತಿ ಕಾರ್ಯ ನಡೆಯುತ್ತಿದೆಯೇ ; ಸುಪ್ರೀಂ ಕೋರ್ಟ್ ಆದೇಶದನ್ವಯ ಮುಂಬಡ್ತಿ ಹಾಗೂ ಹಿಂಬಡ್ತಿ ಮಾಡಿದ ನೌಕರರ ಸಂಖ್ಯೆಯನ್ನು ಇಲಾಖಾವಾರು ಒದಗಿಸುವುದು ;

(ಇ) ಸಾರ್ವಜನಿಕ ಶಿಕ್ಷಣ ಇಲಾಖೆ ಹಾಗೂ ಪದವಿ ಪೂರ್ವ ಶಿಕ್ಷಣ ಇಲಾಖೆಯಲ್ಲಿ ಪದೋನ್ನತಿ ಇರದೇ ಪ್ರಭಾರತ್ವದ ಮೇಲೆ ಕಾರ್ಯ ನಡೆಯುತ್ತಿರುವ ಕಾರಣ ಆಡಳಿತ ಕುಸಿತ ಕಂಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ; ಸಾರ್ವಜನಿಕ ಶಿಕ್ಷಣ ಇಲಾಖೆ, ಪದವಿ ಪೂರ್ವ ಶಿಕ್ಷಣ ಇಲಾಖೆಯಲ್ಲಿ ಯಾವ ಸಮಯ ಮಿತಿಯೊಳಗೆ ಪದೋನ್ನತಿ ನೀಡಿ ಪೂರ್ಣ ಪ್ರಮಾಣದ ಅಧಿಕಾರಿಗಳನ್ನು ನೇಮಿಸಿ ವ್ಯವಸ್ಥೆ ಸುಧಾರಣೆ ಮಾಡಲಾಗುವುದು ?